# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 370 |
| 2 | ಸದಸ್ಯರ ಹೆಸರು | ಶ್ರೀ ಎನ್.ಅಪ್ಪಾಜಿಗೌಡ<br>(ಸ್ಥಳೀಯ ಸಂಸ್ಥೆಗಳ ಕ್ಷೇತ್ರದಿಂದ ಚುನಾಯಿತರಾದವರು) |
| 3 | ಉತ್ತರಿಸುವ ದಿನಾಂಕ | 17.07.2019 |
| 4 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಸರ್ವೆ ನಂ.16/ಪಿ9, ಕಣ್ಣೂರು, ಬಿದರಹಳ್ಳಿ ಹೋಬಳಿ, ಕೆ.ಆರ್.ಪುರಂ ತಾಲ್ಲೂಕು, ಬೆಂಗಳೂರು ಪೂರ್ವ ಈ ಜಮೀನನ್ನು ಪೋಡಿ ಮಾಡಲು ಕೋರಿ ಜಮೀನಿನ ಮಾಲೀಕರು 2012ರಲ್ಲಿ ಅರ್ಜಿ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| (ಆ) | ಹಾಗಿದ್ದಲ್ಲಿ, ಸರ್ಕಾರ ಪೋಡಿ ದುರಸ್ಥಿ ಮಾಡಲು ಕೈಗೊಂಡ ಕ್ರಮಗಳೇನು; (ಸಂಪೂರ್ಣ ದಾಖಲೆಗಳೊಂದಿಗೆ ಮಾಹಿತಿ ನೀಡುವುದು) | ಶ್ರೀ ಕೃಷ್ಣಸಿಂಗ್ ಇವರಿಗೆ ಮಂಜೂರಾಗಿ ಪ್ರಸ್ತುತ ಶ್ರೀ ಎಂ.ರಾಮಚಂದ್ರಪ್ಪ ಇವರಿಗೆ ಖಾತೆ ಇರುವ 03-00 ಎಕರೆ ಜಮೀನಿನ ಪೋಡಿ ಕುರಿತು ಕೈಗೊಂಡ ಕ್ರಮಗಳು ಈ ಕೆಳಗಿನಂತಿರುತ್ತವೆ.<br>01. ಮೇಲ್ಕಂಡ ಜಮೀನಿನ ಮೂಲ ಮಂಜೂರಿ ಕಡತ ಲಭ್ಯವಿರುವುದಿಲ್ಲ. ಆದ್ದರಿಂದ ಸರ್ಕಾರದ ಸುತ್ತೋಲೆ ನಿರ್ದೇಶನದಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ರವರ ಅಧ್ಯಕ್ಷತೆಯಲ್ಲಿ ದಿನಾಂಕ:12.02.2014ರಂದು ಜರುಗಿದ ಗೈರು ವಿಲೇ ಕಡತಗಳ ಸಮಿತಿ ಸಭೆಯಲ್ಲಿ ಪ್ರಕರಣವನ್ನು ಮಂಡಿಸಿ, ಗೈರು ವಿಲೇ ಕಡತ ರಚನೆ ಮಾಡುವ ಬಗ್ಗೆ ತೀರ್ಮಾನ ಕೈಗೊಳ್ಳಲಾಗಿರುತ್ತದೆ.<br>02. ಉಪ ವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗ ಇವರು ದಿನಾಂಕ:06.08.2014ರಲ್ಲಿ ಕಲಂ 67(2)ರಡಿ ಗೈರು ವಿಲೇ ಕಡತ ರಚನೆ ಮಾಡಲು ಆದೇಶ ಹೊರಡಿಸಿರುತ್ತಾರೆ.<br>03. ಪ್ರಸ್ತಾಪಿತ ಸ.ನಂ.16 ಸ್ಕೇಲ್ ನಂಬರ್ ಆಗಿದ್ದು, ಟಿಪ್ಪಣಿ ಇಲ್ಲದ್ದರಿಂದ ಹೊಸದಾಗಿ ಅಳತೆಯಿಂದ ಟಿಪ್ಪಣಿ ತಯಾರಿಸಿದ್ದು, ಅನುಮೋದನೆಯಾಗಿರುತ್ತದೆ.<br>04. ಪ್ರಸ್ತಾಪಿತ 03-00 ಎಕರೆ ಮಂಜೂರಿ ಜಮೀನಿನ ಪೋಡಿ ಕುರಿತು ಅಳತೆ ಕಾರ್ಯ ನಿರ್ವಹಿಸಲಾಗಿ, ಹಾಲಿ ಖಾತೆದಾರರು ಮಂಜೂರಿ ವಿಸ್ತೀರ್ಣಕ್ಕಿಂತ 0-37 ಗುಂಟೆ ಕಡಿಮೆ ಸ್ವಾದೀನಾನುಭವದಲ್ಲಿ ಇರುತ್ತದೆ. ಈ ಬಗ್ಗೆ ತಹಶೀಲ್ದಾರ್‌ರು ಮಂಜೂರಿ ವಿಸ್ತೀರ್ಣವನ್ನು 02 ಎಕರೆ -03 ಗುಂಟೆ ವಿಸ್ತೀರ್ಣಕ್ಕೆ ಸೀಮಿತಗೊಳಿಸಿ ಆದೇಶಿಸಿರುತ್ತಾರೆ.<br>05. ಪ್ರಸ್ತಾಪಿತ ಮಂಜೂರಿ ಜಮೀನಿನ ಬಾಬ್ತು ಖಾತೆದಾರರ ಅನುಭವದಂತೆ ಭೂಮಾಪಕರು ಅಳತೆ ಕಾರ್ಯ ನಿರ್ವಹಿಸಿ ಪೋಡಿ ದಾಖಲೆಗಳನ್ನು ತಯಾರಿಸಿರುತ್ತಾರೆ. |

| | | |
|---|---|---|
| | | 06. ಸುತ್ತೋಲೆ ನಿರ್ದೇಶನದಂತೆ ನಮೂನೆ 1 ರಿಂದ 5 ಅನ್ನು ಸ.ನಂ.16ರಲ್ಲಿ ಮಂಜೂರಾದ ಜಮೀನಿನ ವಿವರಗಳನ್ನು ಒಳಗೊಂಡಂತೆ ನಿಯಮಾನುಸಾರ ಭರ್ತಿ ಮಾಡಲು ತಹಶೀಲ್ದಾರ್‌ರ ಹಂತದಲ್ಲಿ ಕ್ರಮ ಜರುಗಿಸಲಾಗುತ್ತಿದೆ.<br>07. ಸ.ನಂ.16ರ ವಿಸ್ತೀರ್ಣ ಆಕಾರಬಂದಿನಂತೆ 51ಎಕರೆ-13ಗುಂಟೆ ಇದ್ದು ಪಹಣಿ ಕಾಲಂ 3 ರಲ್ಲಿ 135ಎಕರೆ-27ಗುಂಟೆ, ಕಾಲಂ 9 ರಲ್ಲಿ 91 ಎಕರೆ-28ಗುಂಟೆ ಇದ್ದು ಪಹಣಿಯಲ್ಲಿ ಹೆಚ್ಚುವರಿಯಾಗಿ ದಾಖಲಾಗಿರುವ ವಿಸ್ತೀರ್ಣವನ್ನು ಆಕಾರಬಂದ್ ವಿಸ್ತೀರ್ಣಕ್ಕೆ ತಾಳೆ ಮಾಡುವ ಪ್ರಕ್ರಿಯೆಯು ತಹಶೀಲ್ದಾರ್ ಹಾಗೂ ಉಪವಿಭಾಗಾಧಿಕಾರಿಗಳ ಕಛೇರಿಯಲ್ಲಿ ಚಾಲ್ತಿಯಲ್ಲಿದೆ.<br>08. ಸ.ನಂ. 16 ಮತ್ತು 17ರ ಖಾತೆದಾರರ ಅನುಭವವೂ ಅದಲು ಬದಲು ಆಗಿದ್ದು, ಪಹಣಿ ನ್ಯೂನತೆಯನ್ನು ಸರಿಪಡಿಸುವ ಸಂಬಂಧ ಭೂಮಾಪಕರು ಅಳತೆ ಕಾರ್ಯ ಪೂರೈಸಿ, ನಕ್ಷೆ ತಯಾರಿಸಿ ಸಲ್ಲಿಸಿರುತ್ತಾರೆ.<br>09. ಪ್ರಸ್ತುತ ಅರ್ಜಿದಾರರು ಕರ್ನಾಟಕ ಘನ ಉಚ್ಚ ನ್ಯಾಯಾಲಯದಲ್ಲಿ WP 46276/2017ರ ಪ್ರಕರಣ ದಾಖಲಿಸಿರುತ್ತಾರೆ. ತಹಶೀಲ್ದಾರ್‌ರು ವಿಸ್ತೀರ್ಣ ವ್ಯತ್ಯಾಸ ಹಾಗೂ ಖಾತೆದಾರರ ಅನುಭವ ಮತ್ತು ಖಾತೆಗಳ ವ್ಯತ್ಯಾಸದ ಬಗ್ಗೆ ಘನ ಉಚ್ಚ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ. |
| (ಇ) | ಮಾನ್ಯ ಉಚ್ಚ ನ್ಯಾಯಾಲಯವು (WP 26191/2013)10 ಜುಲೈ 2013ರಂದು ಸದರಿ ಜಮೀನಿನ ಪೋಡಿ ಮಾಡಲು ಆದೇಶ ಮಾಡಿದ್ದು ಈವರೆವಿಗೂ ಪೋಡಿ ಮಾಡದೇ ಮಾನ್ಯ ಉಚ್ಚ ನ್ಯಾಯಾಲಯದ ಆದೇಶವನ್ನು ಉಲ್ಲಂಘನೆ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಘನ ಉಚ್ಚ ನ್ಯಾಯಾಲಯದ ರಿಟ್ ಪಿಟೀಷನ್ ಅರ್ಜಿ ಸಂಖ್ಯೆ:26191/2013 ರ ದಿನಾಂಕ:10/7/2013 ರ ಆದೇಶದಲ್ಲಿ ಮೂಲ ದಾಖಲೆಗಳನ್ನು ಪರಿಶೀಲಿಸಿಕೊಂಡು 3 ತಿಂಗಳೊಳಗಾಗಿ ಕಾನೂನಿನ್ವಯ ಪೋಡಿ ಮಾಡಲು ನಿರ್ದೇಶನ ನೀಡಿರುತ್ತದೆ. |
| (ಈ) | ಬಂದಿದ್ದಲ್ಲಿ, ಸರ್ಕಾರ ಈ ಬಗ್ಗೆ ಕೈಗೊಂಡ ಕ್ರಮಗಳೇನು; (ಈವರೆವಿಗೂ ನಡೆದಿರುವ ಪತ್ರ ವಿನಿಮಯ ಮತ್ತು ಇಲಾಖೆಯ ಆದೇಶದ ಸಂಪೂರ್ಣ ಮಾಹಿತಿ ನೀಡುವುದು) | ಸದರಿ ಘನ ಉಚ್ಚ ನ್ಯಾಯಾಲಯದ ಆದೇಶದ ಪಾಲನಾ ಕ್ರಮವಾಗಿ ಮೇಲಿನಂತೆ ಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ. |
| (ಉ) | ಪೋಡಿ ಮಾಡಿದ್ದಲ್ಲಿ, ಸಂಪೂರ್ಣ ಮಾಹಿತಿಯನ್ನು ದಾಖಲೆಗಳೊಂದಿಗೆ ನೀಡುವುದು? | ಭೂಮಾಪಕರು ಖಾತೆದಾರರ 2ಎಕರೆ-03ಗುಂಟೆ ಪ್ರದೇಶದ ಅಳತೆ ಮಾಡಿ ಪೋಡಿ ದಾಖಲೆಗಳನ್ನು ತಯಾರಿಸಿರುತ್ತಾರೆ. ಸುತ್ತೋಲೆಗಳ ಸೂಚನೆಗಳಂತೆ ನಮೂನೆ 1 ರಿಂದ 5 ಅನ್ನು ಭರ್ತಿಮಾಡಿ ಆಕಾರಬಂದ್ ವಿಸ್ತೀರ್ಣಕ್ಕೆ ಪಹಣಿ ಕಾಲಂ 3 ಮತ್ತು 9ರ ವಿಸ್ತೀರ್ಣವನ್ನು ತಾಳೆ ಮಾಡಿ ಪೋಡಿಕಾರ್ಯ ಪೂರ್ಣಗೊಳಿಸಲು ಕ್ರಮವಹಿಸಲಾಗುತ್ತಿದೆ. |

ಕಂಇ 64 ಎಜಿಎನ್ 2019

(ಆರ್.ವಿ. ದೇಶಪಾಂಡೆ)
ಕಂದಾಯ ಸಚಿವರು